


# ಜ್ಯೋತಿಷ ಮಿತ್ರ

ಆನ್‌ಲೈನ್ ದಿನಪತ್ರಿಕೆ

|| ವೇದೋಽಖಿಲೋ ಧರ್ಮಮೂಲಮ್ ||

www.jyothishamithra.com

ಸಂಚಿಕೆ : 816 02-11-2020 ಸೋಮವಾರ

ಶಾರ್ವರಿಸಂವತ್ಸರ ದಕ್ಷಿಣಾಯನ ಶರತ್‌ಋತು ನಿಜ ಆಶ್ವಯುಜಮಾಸ ಕೃಷ್ಣಪಕ್ಷ

## ಸುಜ್ಞಾನ

ಪ್ರಕೃತಿ, ಕಾಲ, ತಾಳ್ಮೆ ಈ ಮೂರು ಮಾನವನ ಮಹಾ ವೈದ್ಯರು.

## ನಿತ್ಯಪಂಚಾಂಗ

ತಿಥಿ : ಬಿದಿಗೆ
( ಗಂಟೆ 25.13ರ ವರೆಗೆ )

ನಕ್ಷತ್ರ : ಕೃತಿಕಾ
( ಗಂಟೆ 23.49ರ ವರೆಗೆ )

ರಾಹುಕಾಲ :
07.52 AM - 09.19 AM

ಗುಳಿಕಕಾಲ :
01.42 PM -03.09 PM



# ರವಿ ಗ್ರಹನಿಂದ ಉಂಟಾಗುವ ಕಾಯಿಲೆಗಳು

ನಮ್ಮ ಪೂರ್ವ ಜನ್ಮದಿಂದ ಹಿಂಬಾಲಿಸಿಕೊಂಡು ಬಂದಿರುವ ಕಾಯಿಲೆಗಳು, ಅನುವಂಶಿಕವಾಗಿ ಈ ಜನ್ಮದಲ್ಲೂ ಕಾಡುತ್ತವೆ. ಇದಕ್ಕೆ ಕಾರಣ, ನಮ್ಮ ಜೀವವು ನಮಗೆ ನಮ್ಮ ಹಿಂದಿನ ಕರ್ಮಗಳನ್ನು ಅನುಭವಿಸಲು ತಕ್ಕ ವಾಹನವನ್ನು (ದೇಹಕ್ಕಾಗಿ) ಕೊಡಬಲ್ಲ ತಾಯಿ ತಂದೆಯರನ್ನು ಹುಡುಕಿಕೊಂಡು ಬಂದಿರುತ್ತದೆ. ರವಿಯು ದೇಹದ ತುಂಬ ಅವಶ್ಯಕವಾದ ಭಾಗಗಳನ್ನು, ಮತ್ತು ಅವಯವಗಳ ರಚನೆಯನ್ನು ಆಳುವನು. ಬಹಳ ಮುಖ್ಯವಾಗಿ ಹೃದಯವನ್ನು ನಿಯಂತ್ರಿಸುವನು. ರವಿಯು ತುಂಬ ಕಲುಷಿತನಾಗಿದ್ದರೆ, ದೃಷ್ಟಿಯು ಬಲಹೀನವಾಗಿರುತ್ತದೆ.

ರವಿಗ್ರಹನೊಬ್ಬನನ್ನೇ ಕಾಯಿಲೆಗಳಿಗೆ ಪರಿಶೀಲಿಸಿದಾಗ, ಅದು ಪ್ರಮುಖವಾಗಿ ಹೃದಯ, ಮೆದುಳು ಮತ್ತು ಕಣ್ಣುಗಳಿಗೆ ಸಂಬಂಧಿಸಿರುತ್ತದೆ. ನಾಡಿ ಮಿಡಿತದಲ್ಲಿ ಏರಿಳಿತಗಳು, ಮುಖದಲ್ಲಿನ ಮೊಡವೆ, ಉಷ್ಣಸಂಬಂಧದ ತೊಂದರೆಗಳು, ರಕ್ತನಾಳಗಳಲ್ಲಿನ ಅಡಚಣೆಗಳು ಇತ್ಯಾದಿಗಳು ರವಿಯ ಆಧಿಪತ್ಯಕ್ಕೆ ಒಳಪಟ್ಟಿರುತ್ತದೆ. ಪುರುಷರಲ್ಲಿ ಬಲಗಣ್ಣು, ಸ್ತ್ರೀಯರಲ್ಲಿ ಎಡಗಣ್ಣು, ಮೂರ್ಛೆ, ತಲೆತಿರುಗುವಿಕೆ, ಜ್ವರ, ಮೆದುಳಿನಲ್ಲಿ ತೊಂದರೆ, ದುರ್ಗಂಧ, ಕಣ್ಣಿನ ಪೊರೆ, ಶೀತದಿಂದ ದೇಹದ ಅವಯವಗಳು ಸೆಟೆಯುವಿಕೆ, ಇತ್ಯಾದಿಗಳ ಬಾಧೆ ಇರುತ್ತದೆ. ರವಿಯು ದ್ವಿಸ್ವಭಾವ ರಾಶಿಗಳಲ್ಲಿ ಕಲುಷಿತನಾಗಿದ್ದರೆ, ರವಿಗೆ ಸಂಬಂಧದಿಂದ ಕಾಯಿಲೆಗಳು ಉಂಟಾಗುತ್ತವೆ.ರವಿಯು ಕೇಂದ್ರಗಳಲ್ಲಿ ಉಚ್ಛ, ಸ್ವರಾಶಿಗತನಾಗಿದ್ದರೆ ಜಾತಕರಲ್ಲಿ ರೋಗ ನಿರೋಧಕ ಶಕ್ತಿಯು ಹೆಚ್ಚಾಗಿರುತ್ತದೆ.



# ವಾಸ್ತು ಪ್ರಕಾರ

## ರಸ್ತೆಗಳು / ನಿವೇಶನಗಳು

**ಉತ್ತರ ದಿಕ್ಕು:** ಜಗತ್ತಿಗೆ ಆಧಾರವಾದ ಸೂರ್ಯನು ಸಹ ಉತ್ತರಕ್ಕೆ ಪ್ರಯಾಣ ಬೆಳೆಸುತ್ತಾನೆ. ಇದನ್ನೇ ಉತ್ತರಾಯಣ ಎನ್ನುವರು. ವಾಸ್ತು ಶಾಸ್ತ್ರ ರೀತಿಯ ಉತ್ತರಕ್ಕೆ ಹೆಚ್ಚು ಪ್ರಾಧಾನ್ಯತೆಯಿದೆ. ಸಾಮಾನ್ಯವಾಗಿ ಉತ್ತರಾಭಿಮುಖವಾಗಿ ಮನೆಯಿರುವವರು ಸೌಖ್ಯವಾಗಿರುತ್ತಾರೆ. ಉನ್ನತಿಗೆ ಬರುವುದಕ್ಕೂ ಹಾಳಾಗುವುದಕ್ಕೂ ಈ ರಸ್ತೆಗಳು ಆಧಾರವಾಗಿರುತ್ತವೆ. ಯಾವುದೇ ನಿವೇಶನವಾಗಲಿ ಆ ನಿವೇಶನಕ್ಕೆ ಉತ್ತರದ ರಸ್ತೆ ಇದ್ದರೆ ಒಳ್ಳೆಯದು. ಕಾರಣ ಉತ್ತರವು ಲಕ್ಷ್ಮಿ ಸ್ಥಾನವು. ಆದ್ದರಿಂದ ಇದನ್ನು ಮೊದಲ ದರ್ಜೆ ನಿವೇಶನವೆನ್ನುತ್ತೇವೆ.

**ಪೂರ್ವ ದಿಕ್ಕು :** ಈ ದಿಕ್ಕನ್ನು ಇಂದ್ರ ಪ್ರತಿನಿಧಿಸುತ್ತಾನೆ. ಆತ್ಮಕಾರಕನಾದ, ಪಿತೃಕಾರಕನಾದ ರವಿಯು ಈ ದಿಕ್ಕನ್ನು ಪ್ರತಿನಿಧಿಸುವ ಗ್ರಹವು. ಪೂರ್ವಕ್ಕೆ ರಸ್ತೆ ಇದ್ದರೆ ಆ ರಸ್ತೆಯಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಿರುವ ಗೃಹಸ್ಥರ ಮನೆಯಾಗಲಿ, ನಿವೇಶನವಾಗಲಿ, ಪುರುಷ ಪ್ರಧಾನವಾಗಿರುತ್ತದೆ. ಅಲ್ಲಿ ವಾಸಿಸುವವರು ಒಳ್ಳೆಯ ಹೆಸರನ್ನು ಗಳಿಸುತ್ತಾರೆ. ಈ ದಿಕ್ಕಿನ ನಿವೇಶನ, ಮನೆಯನ್ನು ಎರಡನೆ ದರ್ಜೆ ನಿವೇಶನವೆಂತಲೂ ಕರೆಯಬಹುದು.

**ಪಶ್ಚಿಮ ದಿಕ್ಕು:** ಈ ದಿಕ್ಕನ್ನು ಮೂರನೇ ದರ್ಜೆಗೆ ಹೋಲಿಸಿ ಈ ದಿಕ್ಕಿನಲ್ಲಿ ಬರುವ ರಸ್ತೆಗಳು ನಿವೇಶನ, ಮನೆಗಳ ಫಲಾಫಲಗಳನ್ನು ಹೇಳಬಹುದು. ಪಶ್ಚಿಮ ದಿಕ್ಕನ್ನು ಶನಿಗ್ರಹವು ಪ್ರತಿನಿಧಿಸಿರುತ್ತದೆ. ಈ ಗ್ರಹದ ಗುಣ, ಸ್ವಭಾವ, ನಡತೆಯ ಅಂಶದಂತೆ ಫಲಾಫಲಗಳು ಸಿಗುತ್ತವೆ. ಪಶ್ಚಿಮ ಎಂದಾಕ್ಷಣ ಆ ನಿವೇಶನಕ್ಕೆ / ಆ ಮನೆಗೆ ಪೂರ್ವ ಇಲ್ಲ ಎಂದು ಅರ್ಥ. ಸೂರ್ಯನು ಅಸ್ತಮಿಸುವ ದಿಕ್ಕು ಪಶ್ಚಿಮ. ಆದರೂ ಸಹ ಈ ದಿಕ್ಕಿನ ನಿವೇಶನಗಳಲ್ಲಿ ವಾಸ್ತು

ಅನುಗುಣವಾಗಿ ಮನೆಯನ್ನು ನಿರ್ಮಿಸಬಹುದು. ಪಶ್ಚಿಮ ವಾಯುವ್ಯದ ದ್ವಾರವಿಟ್ಟು, ಮನೆ ನಿರ್ಮಾಣ ಮಾಡಿದರೆ ಅನಾಯಾಸದ ಆದಾಯವನ್ನು ರಾಜಕೀಯ ಅಧಿಪತ್ಯವನ್ನು ಉಂಟು ಮಾಡುತ್ತದೆ.

**ದಕ್ಷಿಣ ದಿಕ್ಕು :** ಸಾಮಾನ್ಯವಾಗಿ ಈ ದಿಕ್ಕನ್ನು ನಾಲ್ಕನೆ ದರ್ಜೆಗಾಗಿ ಹೋಲಿಸುವುದು. ಆದರೂ ಸಹ ಈ ದಿಕ್ಕಿನಲ್ಲಿ ಇರುವ ನಿವೇಶನದಲ್ಲಿ ಒಳ್ಳೆಯ ಮನೆಯನ್ನು ನಿರ್ಮಾಣ ಮಾಡಬಹುದು. ಈ ದಿಕ್ಕನ್ನು ಪ್ರತಿನಿಧಿಸುವ ಗ್ರಹ ಕುಜ (ಮಂಗಳ). ಈ ಗ್ರಹದ ಸ್ವಭಾವವನ್ನು / ಕಾರಕತ್ವದಂತೆ ಫಲ ಪ್ರತಿಫಲಗಳನ್ನು ಪಡೆಯಬಹುದು.

ಆದ್ದರಿಂದ ಯಾವುದೇ ರಸ್ತೆಯಾಗಲಿ ವಾಸ್ತುವಿನ ಅನುಗುಣವಾಗಿ ಸರಿಪಡಿಸಿಕೊಂಡು ವಾಸ್ತು ರೀತಿಯ ಮನೆ ನಿರ್ಮಿಸಬಹುದು. 'ಸರ್ವಂ ದೈವಾಧೀನಂ, ದೈವ ಮಂತ್ರಾಧೀನಂ, ಮಂತ್ರಂ ಮಾನವಾಧೀನ ಎಂಬಂತೆ ಈ ಸಕಲ ಸೃಷ್ಟಿಯು ಆ ದೇವರ ಆಧೀನ. ಆ ದೇವರು ಮಂತ್ರ/ ಪ್ರಾರ್ಥನೆಯ ಆಧೀನ, ಮಂತ್ರ / ಪ್ರಾರ್ಥನೆ ಮಾನವನ ಆಧೀನ.

ಜ್ಯೋತಿಷ ಮಿತ್ರ ಆನ್ಲೈನ್ ದಿನಪತ್ರಿಕೆ
ಗೌರವ ಸಂಪಾದಕರು : ಜೀವನ್ ಉಳ್ಳಾಲ್
ಸಂಪಾದಕರು : ಶ್ರೀಷ ಎಸ್.
ಕಚೇರಿ ವಿಳಾಸ : ಹತ್ವಾರ್ ಕಾಂಪ್ಲೆಕ್ಸ್, ಹೊಸಬೆಟ್ಟು, ಮಂಗಳೂರು - 575019.
PH : 9986671473 / 9535283535
jmonline@gmail.com www.jyothishamithra.com